

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1090 |
| ಉತ್ತರಿಸಬೇಕಾದ ದಿನಾಂಕ | : | 22.12.2021. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಮುಖ್ಯಮಂತ್ರಿಗಳು 2021-22ನೇ ಆಯವ್ಯಯದಲ್ಲಿ ದೇಶಿಯ ಜಾನುವಾರುಗಳ ಕುರಿ/ಮೇಕೆ ತಳಿಗಳ ಮತ್ತು ಕುಕ್ಕುಟ ತಳಿಗಳ ಶಾಶ್ವತ ಪ್ರದರ್ಶನ ಮತ್ತು ಪ್ರಾತ್ಯಕ್ಷಿಕೆಯೊಂದಿಗೆ ಮಾಹಿತಿ ಹಾಗೂ ತರಬೇತಿ ನೀಡಲು "ಥೀಮ್ ಪಾರ್ಕ್ ಒಂದನ್ನು ಬೆಂಗಳೂರು ಹೆಸರುಘಟ್ಟದ 100 ಎಕರೆ ಪ್ರದೇಶದಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಸ್ಥಾಪಿಸುವುದಾಗಿ ಘೋಷಿಸಿದ್ದು, ಈ ಥೀಮ್ ಪಾರ್ಕ್ ಸ್ಥಾಪನೆ ಯಾವ ಹಂತದಲ್ಲಿದೆ (ಖಾಸಗಿ ಭಾಗಿತ್ವದ ವಿವರಗಳನ್ನು ಒಳಗೊಂಡಂತೆ ಸಂಪೂರ್ಣ ಮಾಹಿತಿ ನೀಡುವುದು) | ದೇಶಿಯ ಆಕಳುಗಳ ಮಹತ್ವವನ್ನು ಬಿಂಬಿಸುವ ಮತ್ತು ಹೈನುಗಾರಿಕೆಯನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಥೀಮ್ ಪಾರ್ಕ್ ಸ್ಥಾಪಿಸಲು 2021-22 ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾಗಿತ್ತು. ದೇಶೀಯ ಜಾನುವಾರುಗಳ ಕುರಿ/ಮೇಕೆ ತಳಿಗಳ ಮತ್ತು ಕುಕ್ಕುಟ ತಳಿಗಳ ಶಾಶ್ವತ ಪ್ರದರ್ಶನ ಮತ್ತು ಪ್ರಾತ್ಯಕ್ಷಿಕೆಯೊಂದಿಗೆ ಮಾಹಿತಿ ಹಾಗೂ ತರಬೇತಿ ನೀಡಲು ಥೀಮ್ ಪಾರ್ಕ್ ಅನ್ನು ಬೆಂಗಳೂರಿನ ಹೆಸರುಘಟ್ಟದ 100 ಎಕರೆ ಪ್ರದೇಶದಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸ್ಥಾಪಿಸಲು ಸರ್ಕಾರದ ಅನುಮೋದನೆ ನೀಡಲಾಗಿತ್ತು. ಆದರೆ, ಹೆಸರಘಟ್ಟವನ್ನು ಗ್ರೇಟರ್ ಹುಲ್ಲುಗಾವಲು ಪ್ರದೇಶವೆಂದು ಘೋಷಣೆ ಮಾಡುವುದಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಂದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿ ಸಂಖ್ಯೆ: 6374/2021 ಸಲ್ಲಿಕೆಯಾಗಿತ್ತು.<br><br>ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:26-05-2021 ರಂದು ತನ್ನ ಆದೇಶದಲ್ಲಿ "Present status of the Hesarghatta Grassland which are the subject matter of this petition shall not be altered in any manner whatsoever" ಎಂದು ನಿರ್ದೇಶನ ನೀಡಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪಶುಪಾಲನಾ ಇಲಾಖೆಯು ಹೆಸರಘಟ್ಟ ವ್ಯಾಪ್ತಿಯ ಕೋಡಿಹಳ್ಳಿ ಗ್ರಾಮದ ಸರ್ವೆ ನಂ.98,99,100,101 ರಲ್ಲಿ ಲಭ್ಯವಿರುವ 121.33 ಎಕರೆ ಜಮೀನಿನಲ್ಲಿ ಥೀಮ್ ಪಾರ್ಕ್ ಅನ್ನು ಮಾಡಲು ಅನುಮತಿಸುವಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ IA (Interlocutor Appilication) ಅನ್ನು ದಾಖಲಿಸಲಾಗಿದೆ.<br><br>ಪ್ರಕರಣವು ಉಚ್ಚ ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿರುವ ಕಾರಣ ಯೋಜನೆಯ ಅನುಷ್ಠಾನ ವಿಳಂಬವಾಗಿರುತ್ತದೆ. |

<table>
<tr><td>ಆ)</td><td>ಇದೇ ಆಯವ್ಯಯದಲ್ಲಿ ರಾಜ್ಯದಲ್ಲಿ ಹೆಚ್ಚಿನ ಮಾಂಸ ಉತ್ಪಾದನೆ ಮತ್ತು ಅಧಿಕ ಮರಿಗಳನ್ನು ನೀಡುವ ಉತ್ತಮ ನಂದಿ ದುರ್ಗಾ ಮೇಕೆ ತಳಿಗಳ ಅಭಿವೃದ್ಧಿ ಮಾಡಿ ಉತ್ಕೃಷ್ಟ ದರ್ಜೆಯ ಹೋತಗಳನ್ನು ರೈತರಿಗೆ ವಿತರಿಸಲು ಒಂದು ಕೋಟಿ ರೂ. ಅನುದಾನವನ್ನು ನೀಡುವುದಾಗಿ ಘೋಷಿಸಿದ್ದು, ಈ ಯೋಜನೆ ಅನುಷ್ಠಾನವನ್ನು ಕಾರ್ಯಗೊಳಿಸುತ್ತಿರುವ ರಾಜ್ಯಮಟ್ಟದ ಮತ್ತು ಜಿಲ್ಲಾಮಟ್ಟದ ಇಲಾಖೆಗಳು ಯಾವುವು ಮತ್ತು ಯೋಜನೆ ಅಡಿ ಇದುವರೆಗೆ ಸಾಧಿಸಿರುವ ಪ್ರಗತಿ ಏನು? (ವಿವರ ನೀಡುವುದು)</td><td>1. ರಾಜ್ಯ ಮಟ್ಟದಲ್ಲಿ ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮದ ವತಿಯಿಂದ ಮತ್ತು ಚಿತ್ರದುರ್ಗ ಜಿಲ್ಲೆಯ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮದ ಸಹಾಯಕ ನಿರ್ದೇಶಕರು ಜಿಲ್ಲಾ ಮಟ್ಟದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದಾರೆ.<br>2. ಸದರಿ ಯೋಜನೆಗೆ ಆಯವ್ಯಯದಲ್ಲಿ ರೂ.1.00 ಕೋಟಿ ಅನುದಾನವನ್ನು ಹಂಚಿಕೆ ಮಾಡಿದ್ದು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ನೀರಗುಂದ ಕಾವಲಿನಲ್ಲಿ ಅಗತ್ಯ ನಾಗರೀಕ ಕಾಮಗಾರಿಗಳಾದ ಮೇಕೆ ಶೆಡ್ ಮತ್ತು ಕಛೇರಿ ಕಟ್ಟಡ, ನೀರಿನ ಸೌಲಭ್ಯ ಹಾಗೂ ಮೇವು ಅಭಿವೃದ್ಧಿಗಾಗಿ ರೂ.80.00 ಲಕ್ಷಗಳನ್ನು ಸಹಾಯಕ ನಿರ್ದೇಶಕರು ರವರಿಗೆ ಬಿಡುಗಡೆಯಾಗಿದ್ದು, ಕಟ್ಟಡ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.</td></tr>
<tr><td>ಇ)</td><td>ರಾಜ್ಯದ ಕೊಪ್ಪಳದಲ್ಲಿ ನಾರಿ ಸುವರ್ಣ ತಳಿಯ ಸಂವರ್ಧನಾ ಕೇಂದ್ರವನ್ನು ಸ್ಥಾಪಿಸಲಾಗುವುದೆಂದು ಘೋಷಿಸಿದ್ದು, ಈ ಕೇಂದ್ರ ಸ್ಥಾಪನೆಯ ಪ್ರಗತಿಯ (ವಿವರ ನೀಡುವುದು)</td><td>ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲ್ಲೂಕಿನ ನಿಲಗೊಲ್ಲ ಗ್ರಾಮದ ಸರ್ವೆ ನಂ: 25ರಲ್ಲಿ ನಾರಿ ಸುವರ್ಣ ತಳಿ ಸಂವರ್ಧನಾ ಕೇಂದ್ರವನ್ನು ಸ್ಥಾಪಿಸಲು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕಂದಾಯ ಇಲಾಖೆಯಿಂದ 9 ಎಕರೆ 36 ಗುಂಟೆ ಜಾಗವನ್ನು ಪಡೆಯಲಾಗಿದ್ದು, ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿಪಿಪಿ) ಮಾದರಿಯಲ್ಲಿ ನಾರಿ ಸುವರ್ಣ ತಳಿ ಸಂವರ್ಧನಾ ಕೇಂದ್ರವನ್ನು ಸ್ಥಾಪಿಸಲು ಕ್ರಮಕೈಗೊಳ್ಳಲಾಗುತ್ತಿದೆ.</td></tr>
<tr><td>ಈ)</td><td>ರಾಜ್ಯದಲ್ಲಿ ಹೊರ ರಾಜ್ಯದಲ್ಲಿ ದೇಶಿ ತಳಿಗಳಾದಗಿರ್, ಸಾಹಿವಾಲ್, ಒಂಗೋಲ್, ಥಾರ್ ಪಾರ್ಕರ್ ಮತ್ತು ದೇವಣಿ ತಳಿಗಳನ್ನು ಅಭಿವೃದ್ಧಿ ಪಡಿಸಿ, ರಾಜ್ಯದ ರೈತರಿಗೆ ಪರಿಚಯಿಸಲು ಸಮಗ್ರ ಗೋಸಂಕಲ ಸಮೃದ್ಧಿ ಯೋಜನೆಯನ್ನು ಜಾರಿಗೊಳಿಸುವುದಾಗಿ ಘೋಷಿಸಿದ್ದು, ಈ ಯೋಜನೆಯ ಜಾರಿ ಯಾವ ಹಂತದಲ್ಲಿದೆ ಈ ಯೋಜನೆ ಅಡಿ ಒದಗಿಸಿರುವ ಅನುದಾನವೆಷ್ಟು? (ಇದುವರೆಗೆ ಸಾಧಿಸಿರುವ ಭೌತಿಕ ಮತ್ತು ಆರ್ಥಿಕ ಪ್ರಗತಿ ಒಳಗೊಂಡಂತೆ ಸಂಪೂರ್ಣ ಮಾಹಿತಿ ನೀಡುವುದು)</td><td>ಸಮಗ್ರ ಗೋಸಂಕುಲ ಸಮೃದ್ಧಿ ಯೋಜನೆಯಡಿಯಲ್ಲಿ ಗಿರ್ ಜಾತಿಯ 20 ಹಸುಗಳು, ಸಾಹಿವಾಲ್ ಜಾತಿಯ 10 ಹಸುಗಳು ಮತ್ತು ಒಂಗೋಲ್ ಜಾತಿಯ 11 ಹಸುಗಳನ್ನು ಖರೀದಿಸಲಾಗಿದೆ. ದೇವಣಿ ತಳಿಯ ರಾಸುಗಳ ಆಯ್ಕೆ ಪ್ರಕ್ರಿಯೆಗೆ ಚಾಲನೆ ನೀಡಲಾಗಿದೆ.<br><br>ಈ ಯೋಜನೆಯಡಿ ರೂ.100.00 ಲಕ್ಷಗಳ ಅನುದಾನವನ್ನು ನಿಗದಿಗೊಳಿಸಲಾಗಿದೆ. ರೂ.75.00 ಲಕ್ಷಗಳ ಅನುದಾನವು ಬಿಡುಗಡೆಗೊಳಿಸಿದ್ದು ಭೌತಿಕ ಮತ್ತು ಆರ್ಥಿಕ ಪ್ರಗತಿಯ ವಿವರ ಈ ಕೆಳಕಂಡಂತಿರುತ್ತದೆ.<br>
<table>
<tr><td rowspan="3">1</td><td rowspan="3">ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಕುರಿಕುಪ್ಪೆ</td><td>ಓಂಗೋಲ್</td><td>20</td><td>20.00</td><td>11</td><td>15.00</td></tr>
<tr><td>ದೇವಣಿ</td><td>20</td><td>20.00</td><td>00</td><td>–</td></tr>
<tr><td>ಥಾರ್ ಪಾರ್ಕರ್</td><td>20</td><td>20.00</td><td>00</td><td>–</td></tr>
<tr><td>2</td><td>ಜಾನುವಾರು ಸಂವರ್ಧನಾ ಮತ್ತು</td><td>ಸಾಹಿವಾಲ್</td><td>20</td><td>20.00</td><td>10</td><td>15.00</td></tr>
</table></td></tr>
</table>

| | | | | | | | | | | |
|---|---|---|---|---|---|---|---|---|---|---|
| | | | | ತರಬೇತಿ ಕೇಂದ್ರ, ಕೂಡಿಗೆ | | | | | | |
| | | | 3 | ಕಡಸು ಉತ್ಪಾದನಾ ಮತ್ತು ತರಬೇತಿ ಕೇಂದ್ರ, ಬರಗಿ | ಗಿರ್ | 20 | 20.00 | 20 | 20.00 | |
| | | | | | **ಒಟ್ಟು** | **100** | **100.00** | **41** | **50.00** | |

**ಪಸಂಮೀ ಇ-331 ಸಲೆವಿ 2021**

**ಪ್ರಭು ಬಿ. ಚವ್ಹಾಣ್**
**ಪಶುಸಂಗೋಪನೆ ಸಚಿವರು,**